ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ವಿಶ್ವದ ಸೃಷ್ಟಿಕರ್ತನಾದ ಅಲ್ಲಾಹನು ಮನುಷ್ಯನನ್ನು ಇತರೆಲ್ಲ ಸೃಷ್ಟಿಗಳಿಗಿಂತ ಶ್ರೇಷ್ಠ ಗುಣವಿಶೇಷತೆಗಳೊಂದಿಗೆ ಸೃಷ್ಟಿಸಿರುವನು. ಅಲ್ಲದೆ ಈ 'ಸೃಷ್ಟಿ ಶ್ರೇಷ್ಠನ' ಮಾರ್ಗದರ್ಶನಕ್ಕೆ ಬೇಕಾದ ವ್ಯವಸ್ಥೆಯನ್ನು ಕೂಡಾ ಆ ದೇವನೇ ಮಾಡಿರುವನು. ಅವನು ಮಾನವರ ಪೈಕಿ ಕೆಲವರನ್ನು ಆರಿಸಿ ಅವರಿಗೆ ಬದುಕಿನ ರಹಸ್ಯಗಳನ್ನು ತಿಳಿಸಿದನು. ಅವರ ಮೂಲಕ ಮಾನವಕುಲಕ್ಕೆ ಇಹ–ಪರ ವಿಜಯದ ಮಾರ್ಗವನ್ನು ತೋರಿಸಿದನು.

ಈ ರೀತಿ ಆರಿಸಲ್ಪಡುವ ಮತ್ತು ಮಾನವ ಕುಲಕ್ಕೆ ದೇವನ ಸಂದೇಶ ವನ್ನು ತಲುಪಿಸುವ ಮಹಾ ಪುರುಷರನ್ನು ಪ್ರವಾದಿಗಳು ಅಥವಾ ಸಂದೇಶ ವಾಹಕರು ಎಂದು ಕರೆಯಲಾಗುತ್ತದೆ. ಇಂತಹ ಪ್ರವಾದಿಗಳು ವಿವಿಧ ಕಾಲ ಗಳಲ್ಲಿ ಮತ್ತು ಲೋಕದ ವಿವಿಧ ಭಾಗಗಳಲ್ಲಿ ಕಂಡು ಬಂದಿರುವರು ಹಾಗೂ ಅವರು ಮಾನವ ಕುಲಕ್ಕೆ ಸತ್ಯವನ್ನೂ ಸನ್ಮಾರ್ಗವನ್ನೂ ಪರಿಚಯಿಸುವ ಕರ್ತವ್ಯವನ್ನು ನೆರವೇರಿಸಿರುವರು ಎಂಬುದಕ್ಕೆ ಇತಿಹಾಸವು ಸಾಕ್ಷಿಯಾಗಿದೆ.

ಪ್ರವಾದಿ ಮುಹಮ್ಮದ್(ಸ)ರವರು ಮಾನವಕುಲಕ್ಕೆ ಸನ್ಮಾರ್ಗವನ್ನು ತೋರಿಸಿ ಕೊಡಲು ಜಗದೊಡೆಯನ ಕಡೆಯಿಂದ ನಿಯುಕ್ತರಾದ ಅಂತಿಮ ಸಂದೇಶವಾಹಕರು. ಇನ್ನು ಜಗತ್ತಿಗೆ ಯಾರೂ ಅಲ್ಲಾಹನ ವತಿಯಿಂದ ಸಂದೇಶವಾಹಕರಾಗಿ ಬರಲಿಕ್ಕಿಲ್ಲ. ಪ್ರವಾದಿ ಮುಹಮ್ಮದ್(ಸ)ರ ಕುರಿತು ಪವಿತ್ರ ಕುರ್‌ಆನ್ ಹೇಳುತ್ತದೆ, "ನಾವು ನಿಮ್ಮನ್ನು ಸಕಲ ಲೋಕದವರಿಗೆ ಅನುಗ್ರಹವಾಗಿ ಮಾಡಿ ಕಳುಹಿಸಿರುತ್ತೇವೆ." ಪ್ರಸ್ತುತ ಕುರ್‌ಆನಿನ ಹೇಳಿಕೆಗೆ ತಕ್ಕಂತೆ ಪ್ರವಾದಿ ಮುಹಮ್ಮದ್(ಸ)ರವರು ಮಾತ್ರ ಲೋಕನಾಯಕನಾಗಲು ಅರ್ಹರಾದ ಏಕೈಕ ವ್ಯಕ್ತಿ ಎಂಬುದನ್ನು ಈ ಕಿರು ಹೊತ್ತಿಗೆಯಲ್ಲಿ ಪ್ರತಿಪಾದಿಸ ಲಾಗಿದೆ. ಪ್ರವಾದಿ ಮುಹಮ್ಮದ್(ಸ)ರವರ ಬಗ್ಗೆ ಹೆಚ್ಚಿನ ಅಧ್ಯಯನಕ್ಕೆ ಈ ಬರಹ ಪ್ರೇರಕವಾದೀತೆಂದು ನಿರೀಕ್ಷಿಸುತ್ತೇವೆ.

ಶಾಂತಿ ಪ್ರಕಾಶನ

# ಲೋಕನಾಯಕ

ಮುಸ್ಲಿಮರಾದ ನಾವು ಪ್ರವಾದಿ ಮುಹಮ್ಮದ್(ಸ) ಅವರನ್ನು 'ಲೋಕನಾಯಕ' ಎನ್ನುತ್ತೇವೆ. ಹಿಂದಿ ಭಾಷೆಯಲ್ಲಿ ಅದನ್ನು 'ಜಗತ್‌ಗುರು' ಎಂದೂ ಇಂಗ್ಲಿಷ್‌ನಲ್ಲಿ 'ಲೀಡರ್ ಆಫ್ ದಿ ವರ್ಲ್ಡ್' ಎಂದೂ ಅರ್ಥೈಸಬಹುದು. ಮೇಲ್ನೋಟಕ್ಕೆ ಇದೊಂದು ಮಹಾಬಿರುದೆಂದು ತೋರುತ್ತದೆ. ಆದರೆ ಈ ಬಿರುದನ್ನು ಯಾವ ಅತ್ಯುನ್ನತ ವ್ಯಕ್ತಿಗೆ ನೀಡಲಾಗಿದೆಯೋ ಆ ವ್ಯಕ್ತಿಯ ಸಾಧನೆಗಳನ್ನು ನೋಡುವಾಗ ಅವರನ್ನು ಲೋಕನಾಯಕನೆಂದು ಸಂಬೋಧಿಸಿದರೆ ಅದೇನೂ ಅತಿಶಯೋಕ್ತಿ ಯಾಗಲಾರದು. ಬದಲಾಗಿ ಅವರು ನಿಜವಾಗಿಯೂ ಅದಕ್ಕೆ ಅರ್ಹರಾಗಿದ್ದಾರೆ ಎಂದು ತಿಳಿಯುತ್ತದೆ.

ಒಬ್ಬ ವ್ಯಕ್ತಿಯನ್ನು ಲೋಕದ ನಾಯಕ ಎನ್ನಬೇಕಾದರೆ ನಾಲ್ಕು ಶರತ್ತುಗಳಿವೆ.

1. ಅವನು ಒಂದು ವಿಶಿಷ್ಟ ದೇಶ, ಜನಾಂಗ ಅಥವಾ ವರ್ಗದ ಒಳಿತಿಗಾಗಿ ರದೆ, ಸಮಸ್ತ ಲೋಕದ ಜನರ ಒಳಿತಿಗಾಗಿ ಕೆಲಸ ಮಾಡಿರಬೇಕು. ಒಬ್ಬ ದೇಶಭಕ್ತ ಅಥವಾ ಜನಾಂಗಪ್ರಿಯ ನಾಯಕನನ್ನು ಅವನು ತನ್ನವರಿಗಾಗಿ ಬಹಳ ದುಡಿದಿದ್ದಾನೆ ಎಂಬ ಕಾರಣಕ್ಕಾಗಿ ನೀವು ಎಷ್ಟು ಬೇಕಾದರೂ ಗೌರವಿಸಬಹುದು. ಆದರೆ ನೀವು ಅವನ ದೇಶದ ಅಥವಾ ಅವನ ಜನಾಂಗದವರಾಗಿಲ್ಲದ ಕಾರಣ ಅವನು ನಿಮ್ಮ ನಾಯಕನಾಗಲಾರ. ಒಬ್ಬ ವ್ಯಕ್ತಿಯ ದೇಶಭಕ್ತಿ, ಸಹಾನುಭೂತಿ ಮತ್ತು ಸಾಧನೆಗಳೆಲ್ಲವೂ ಚೀನಾ ಅಥವಾ ಸ್ಪೈಯಿನ್‌ಗೆ ಮಾತ್ರ ಸೀಮಿತವಾಗಿದ್ದರೆ ಭಾರತೀಯನಾದ ನಾನೇಕೆ ಅವನನ್ನು ನನ್ನ ನಾಯಕನೆಂದು ಒಪ್ಪಬೇಕು? ತದ್ವಿರುದ್ಧವಾಗಿ ಅವನು ತನ್ನ ಜನಾಂಗಕ್ಕೆ ಇತರ ಜನಾಂಗಗಳಿಗಿಂತ ಮೇಲ್ಮೆ ನೀಡಹೊರಟರೆ

ಮತ್ತು ಇತರರನ್ನು ಅಧೋಗತಿಗೆ ತಳ್ಳಿ ತನ್ನ ಜನಾಂಗವನ್ನೇ ಮೇಲೆತ್ತ ಬಯಸಿದರೆ ನಾನು ಅವನನ್ನು ದ್ವೇಷಿಸಲೇ ಬೇಕಾಗುತ್ತದೆ. ಲೋಕದ ಎಲ್ಲ ಜನರು ಕೇವಲ ಒಂದು ಕಾರಣಕ್ಕಾಗಿ ಒಬ್ಬ ವ್ಯಕ್ತಿಯನ್ನು ತಮ್ಮ ನಾಯಕನೆಂದು ಒಪ್ಪಿಕೊಳ್ಳಬಹುದು. ಅದೇನೆಂದರೆ ಅವನ ದೃಷ್ಟಿಯಲ್ಲಿ ಸಕಲ ಜನಾಂಗಗಳೂ ಎಲ್ಲ ಮಾನವರೂ ಸಮಾನರಾಗಿರಬೇಕು. ಅವನು ಎಲ್ಲರ ಸಮಾನ ಹಿತಚಿಂತಕನಾಗಿರಬೇಕು ಮತ್ತು ತನ್ನ ಹಿತಚಿಂತನೆಯಲ್ಲಿ ಯಾರ ಬಗ್ಗೆಯೂ ತಾರತಮ್ಯ ತೋರಿಸುವವನಾಗಿರಬಾರದು.

2. ಒಬ್ಬನನ್ನು ಲೋಕದ ನಾಯಕನೆನ್ನಬೇಕಾದರೆ ಅವನು ಸಮಸ್ತ ಲೋಕದ ಜನರ ಮಾರ್ಗದರ್ಶನಕ್ಕೆ ಬೇಕಾದಂತಹ ತತ್ವಗಳನ್ನು ಲೋಕಕ್ಕೆ ನೀಡಿರಬೇಕು ಮತ್ತು ಮಾನವ ಜೀವನದ ಎಲ್ಲ ಪ್ರಮುಖ ಸಮಸ್ಯೆಗಳಿಗೆ ಬೇಕಾದ ಪರಿಹಾರ ಆ ತತ್ವಗಳಲ್ಲಿರಬೇಕು. ನಾಯಕ ಎಂದರೆ ಮಾರ್ಗದರ್ಶಕ. ಒಳಿತು ಮತ್ತು ಯಶಸ್ಸಿನ ಮಾರ್ಗ ತೋರಿಸಲಿಕ್ಕಾಗಿಯೇ ನಾಯಕನ ಅಗತ್ಯವಿರುತ್ತದೆ. ಆದುದರಿಂದ ಸಮಸ್ತ ಲೋಕದ ಜನರ ಯಶಸ್ಸಿಗೆ ಬೇಕಾದ ಮಾರ್ಗವನ್ನು ತೋರಿಸಬಲ್ಲವನೇ ಲೋಕದ ನಾಯಕನಾಗಲು ಅರ್ಹನಾಗಬಲ್ಲನು.

3. ಅವನ ಮಾರ್ಗದರ್ಶನವು ಯಾವುದೇ ವಿಶಿಷ್ಟ ಕಾಲಾವಧಿಗಾಗಿರದೆ ಎಲ್ಲ ಕಾಲಗಳಿಗೆ, ಎಲ್ಲ ಪರಿಸ್ಥಿತಿಗಳಿಗೆ ಸಮಾನ ಉಪಯುಕ್ತವೂ ಸೂಕ್ತವೂ ಅನುಸರಣೆಗೆ ಯೋಗ್ಯವೂ ಆಗಿರಬೇಕು. ಒಬ್ಬನ ಮಾರ್ಗದರ್ಶನವು ಒಂದು ಕಾಲಕ್ಕೆ ಯೋಗ್ಯವೂ ಇನ್ನೊಂದು ಕಾಲಕ್ಕೆ ಅಯೋಗ್ಯವೂ ಆಗಿದ್ದರೆ ಅವನನ್ನು ಲೋಕದ ನಾಯಕನೆನ್ನುವಂತಿಲ್ಲ. ಈ ಲೋಕವು ಉಳಿದಿರುವ ತನಕ ಯಾರ ಮಾರ್ಗದರ್ಶನವು ಯೋಗ್ಯವಾಗಿರುವುದೋ ಅವನೇ ಲೋಕದ ನಾಯಕನಾಗಬಲ್ಲ.

4. ಈ ನಾಯಕನು ಕೇವಲ ಜೀವನದ ತತ್ವಗಳನ್ನು ಲೋಕಕ್ಕೆ ಕೊಟ್ಟು ಸುಮ್ಮನಾಗಿರದೆ ತಾನು ಪ್ರತಿಪಾದಿಸಿದ ತತ್ವಗಳನ್ನು ಜೀವನದಲ್ಲಿ ಅಳವಡಿಸಿ ತೋರಿಸುವುದರ ಜೊತೆಗೆ ಅದರ ಆಧಾರದಲ್ಲಿ ಒಂದು ಜೀವಂತ ಸಮಾಜವನ್ನು ಕಟ್ಟಿ ತೋರಿಸಿರಬೇಕು. ಕೇವಲ ತತ್ವಗಳನ್ನು ಪ್ರತಿಪಾದಿಸುವವನು ಹೆಚ್ಚೆಂದರೆ ಒಬ್ಬ ಚಿಂತಕನಾಗಬಲ್ಲ. ಆದರೆ ಅವನು ನಾಯಕನಾಗುವಂತಿಲ್ಲ. ನಾಯಕನಾಗಬೇಕಾದರೆ ಆತನು ತನ್ನ ತತ್ವಗಳನ್ನು ಕಾರ್ಯತಃ ಮಾಡಿ ತೋರಿಸಿರಬೇಕು.

ಇನ್ನು ನಾವು 'ಲೋಕನಾಯಕ' ಎಂದು ಹೇಳುವ ವ್ಯಕ್ತಿಯಲ್ಲಿ ಪ್ರಸ್ತುತ ನಾಲ್ಕು

ಶರತ್ತುಗಳು ಎಷ್ಟರ ಮಟ್ಟಿಗೆ ಇವೆಯೆಂಬುದನ್ನು ಪರಿಶೀಲಿಸೋಣ.

ಮೊಟ್ಟ ಮೊದಲನೆಯ ಶರತ್ತನ್ನು ನೋಡಿರಿ. ಮುಹಮ್ಮದ್(ಸ) ಅವರ ಜೀವನವನ್ನು ನೀವು ಅಧ್ಯಯನ ಮಾಡಿದರೆ, ಅವರ ಜೀವನವು ಓರ್ವ ಜನಾಂಗೀಯವಾದಿಯ ಅಥವಾ ದೇಶಭಕ್ತನ ಜೀವನವಾಗಿರದೆ, ಒಬ್ಬ ಮಾನವ ಪ್ರೇಮಿಯ ಮತ್ತು ಒಂದು ಸಾರ್ವಲೌಕಿಕ ಸಿದ್ಧಾಂತವನ್ನು ಹೊಂದಿರುವ ವ್ಯಕ್ತಿಯ ಜೀವನವಾಗಿದೆಯೆಂದು ಒಂದೇ ನೋಟದಲ್ಲಿ ತಿಳಿದುಕೊಳ್ಳುವಿರಿ. ಅವರ ದೃಷ್ಟಿಯಲ್ಲಿ ಮಾನವರೆಲ್ಲರೂ ಸಮಾನರಾಗಿದ್ದರು. ಯಾವುದೇ ಒಂದು ಕುಟುಂಬದ, ಒಂದು ವರ್ಗದ, ಒಂದು ಜನಾಂಗದ, ಒಂದು ಜನ ವಿಭಾಗದ ಅಥವಾ ಒಂದು ದೇಶದ ವಿಶೇಷ ಸ್ವಾರ್ಥ ಲಾಭದೊಂದಿಗೆ ಅವರಿಗೆ ಆಸಕ್ತಿಯಿರಲಿಲ್ಲ. ಬಡವ-ಬಲ್ಲಿದ, ಉಚ್ಚ-ನೀಚ, ಕರಿಯ-ಬಿಳಿಯ, ಅರಬ-ಅರಬೇತರ, ಪೌರ್ವಾತ್ಯ-ಪಾಶ್ಚಿಮಾತ್ಯ, ಸಬಯನ-ಆರ್ಯ ಎಂಬ ಯಾವುದೇ ವ್ಯತ್ಯಾಸವಿಲ್ಲದೆ ಅವರೆಲ್ಲರೂ ಒಂದೇ ಮಾನವಕುಲದ ಸದಸ್ಯರು ಎಂಬ ನೆಲೆಯಲ್ಲಿ ಅವರನ್ನು ನೋಡುತ್ತಿದ್ದರು. ಅವರ ಬಾಯಿಯಿಂದ ಇಡೀ ಜೀವನದಲ್ಲಿ ಅವರಿಗೆ ಮಾನವ ಸಮಾಜದ ಯಾವುದೇ ಒಂದು ವರ್ಗದ ಹಿತಾಸಕ್ತಿಯೊಂದಿಗೆ ಹೆಚ್ಚಿನ ಒಲವಿದೆ ಎಂಬ ಅನುಮಾನ ಬರುವಂತಹ ಒಂದೇ ಒಂದು ಶಬ್ದವಾಗಲಿ, ಮಾತಾಗಲಿ ಹೊರಟಿಲ್ಲ ಅಥವಾ ಅವರ ಇಡೀ ಜೀವನದಲ್ಲಿ ಅವರಿಂದ ಅಂತಹ ಯಾವುದೇ ಒಂದು ಕೆಲಸ ನಡೆದಿಲ್ಲ. ಆದುದರಿಂದಲೇ ಅವರ ಜೀವನಾವಧಿಯಲ್ಲೇ ಅರಬರು ಅವರ ಆಪ್ತ ಸಂಗಾತಿಗಳಾದಂತೆಯೇ ಇಥಿಯೋಪಿಯನರು, ಇರಾನಿಯರು, ರೋಮನರು, ಈಜಿಪ್ಟ್‌ನವರು ಮತ್ತು ಇಸ್ರೇಲಿಗಳು ಕೂಡಾ ಅವರ ಸಂಗಾತಿಗಳಾದರು. ಅವರ ನಿಧನಾನಂತರ ಭೂಮುಖದ ಮೇಲಿರುವ ನಾಲ್ಕೂ ಮೂಲೆಯಲ್ಲಿ ವ್ಯಾಪಿಸಿರುವ ಪ್ರತಿಯೊಂದು ಪೀಳಿಗೆ ಮತ್ತು ಜನಾಂಗದವರು ಅವರ ಜನಾಂಗವಾಗಿರುವ ಅರಬರಂತೆಯೇ ಅವರನ್ನು ತಮ್ಮ ಮಾರ್ಗದರ್ಶಕನೆಂದು ಅಂಗೀಕರಿಸಿದರು. ಇಂದು ನೀವು ಒಬ್ಬ ಭಾರತೀಯನ ಬಾಯಿಯಿಂದ ಶತಮಾನಗಳ ಹಿಂದೆ ಅರೇಬಿಯದಲ್ಲಿ ಹುಟ್ಟಿದಂತಹ ಒಬ್ಬ ವ್ಯಕ್ತಿಯ ಗುಣಗಾನ ಕೇಳುವುದು ಕೂಡಾ ಈ ಅಪ್ಪಟ ಮಾನವೀಯತೆಯ ಪವಾಡವೇ ಆಗಿದೆ.

ಇನ್ನು ಎರಡನೆಯ ಮತ್ತು ಮೂರನೆಯ ಶರತ್ತುಗಳನ್ನು ಒಟ್ಟಾಗಿ ಪರಿಶೀಲಿಸಿ ನೋಡೋಣ. ಮುಹಮ್ಮದ್(ಸ) ಅವರು ವಿವಿಧ ಜನಾಂಗಗಳ ಮತ್ತು ವಿವಿಧ ದೇಶಗಳ ತಾತ್ಕಾಲಿಕ ಮತ್ತು ಪ್ರಾದೇಶಿಕ ಸಮಸ್ಯೆಗಳ ಚರ್ಚೆಯಲ್ಲಿ ತಮ್ಮ ಸಮಯವನ್ನು ಹಾಳು ಮಾಡಲಿಲ್ಲ. ಬದಲಾಗಿ ಈ ಲೋಕದಲ್ಲಿ ಅವರು ತಮ್ಮ ಸಂಪೂರ್ಣ ಶಕ್ತಿಯನ್ನು ಅಖಿಲ ಮಾನವರ ಚಿಕ್ಕ ಪುಟ್ಟ ಸಮಸ್ಯೆಗಳು ಸ್ವಯಂ ಬಗೆಹರಿಯಬಲ್ಲಂತಹ ಮಾನವರ ಅತಿದೊಡ್ಡ ಸಮಸ್ಯೆಯೊಂದನ್ನು ಬಗೆಹರಿಸಲು ವಿನಿಯೋಗಿಸಿದರು. ಆ ದೊಡ್ಡ ಸಮಸ್ಯೆಯೇನಾಗಿತ್ತು ಎಂಬುದೇ ಮುಖ್ಯ ಪ್ರಶ್ನೆ. ಅದು ವಿಶ್ವವ್ಯವಸ್ಥೆಯು ಯಥಾರ್ಥದಲ್ಲಿ ಯಾವ ತತ್ವ ಸಿದ್ಧಾಂತಗಳ ಆಧಾರದಲ್ಲಿ ನೆಲೆ ನಿಂತಿದೆಯೋ ಅದೇ ತತ್ವ ಸಿದ್ಧಾಂತಗಳ ಆಧಾರದಲ್ಲಿ ಮಾನವನ ಜೀವನ ವ್ಯವಸ್ಥೆಯೂ ನೆಲೆಗೊಳ್ಳಬೇಕು ಎಂಬುದೇ ಆಗಿತ್ತು. ಏಕೆಂದರೆ ಮಾನವನೂ ಈ ವಿಶ್ವದ ಒಂದು ಅಂಗವೇ ಆಗಿದ್ದಾನೆ. ಒಂದು ಅಂಗದ ಚಲನೆಯು ಇಡೀ ವ್ಯವಸ್ಥೆಯ ಚಲನೆಗೆ ವಿರುದ್ಧವಾಗಿದ್ದರೆ ಅದುವೇ ಕೆಡುಕಿಗೆ ಮೂಲ ಕಾರಣ ವಾಗುತ್ತದೆ. ಇದನ್ನು ನೀವು ಚೆನ್ನಾಗಿ ತಿಳಿಯಬಯಸುವುದಾದರೆ ಅದಕ್ಕೆ ಒಂದು ಸುಲಭ ಉಪಾಯವಿದೆ. ನೀವು ನಿಮ್ಮ ದೃಷ್ಟಿಯನ್ನು ಕಾಲ ಮತ್ತು ಪ್ರಾದೇಶಿಕ ಗಡಿಗಳಿಂದ ಮುಕ್ತಗೊಳಿಸಿರಿ ಮತ್ತು ಆದಿಯಿಂದ ಈ ವರೆಗಿನ ಹಾಗೂ ಮುಂದಿನ ಅನಂತ ಕಾಲದವರೆಗೆ ವಾಸಿಸುವ ಮಾನವರು ನಿಮ್ಮ ಮುಂದಿದ್ದಾರೆ ಎಂಬಂತೆ ನೀವು ಈ ಭೂಮಿಯ ಮೇಲೆ ದೃಷ್ಟಿ ಹಾಯಿಸಿರಿ. ಅನಂತರ ಮಾನವ ಜೀವನದಲ್ಲಿ ಉಂಟಾಗಿರುವ ಅಥವಾ ಉಂಟಾಗಲು ಸಾಧ್ಯವಿರುವ ಕೆಡುಕಿನ ಯಾವುದೇ ರೂಪವಿದ್ದರೂ ಅದರ ಮೂಲವೆಲ್ಲಿದೆ ಅಥವಾ ಎಲ್ಲಿರಬಹುದು ಎಂಬುದನ್ನು ನೋಡಿರಿ. ಈ ಪ್ರಶ್ನೆಯ ಮೇಲೆ ನೀವು ಎಷ್ಟು ಚಿಂತನೆ ನಡೆಸಿದರೂ ಎಷ್ಟು ಹುಡುಕಾಟ ನಡೆಸಿದರೂ ಎಷ್ಟು ಸಂಶೋಧನೆ ನಡೆಸಿದರೂ ಮಾನವನು ದೇವನ ವಿರುದ್ಧ ಮಾಡಿರುವ ಬಂಡಾಯವೇ ಸಕಲ ಕೆಡುಕುಗಳ ಮೂಲ ಎಂಬ ಒಂದೇ ಉತ್ತರ ನಿಮಗೆ ದೊರೆಯುವುದು. ಏಕೆಂದರೆ ದೇವನಿಗೆದುರು ಬಂಡೆದ್ದು ಮಾನವನಿಗೆ ಎರಡರಲ್ಲೊಂದು ಮಾರ್ಗವನ್ನವಲಂಬಿಸದಿರಲು ಸಾಧ್ಯವಿಲ್ಲ. ಒಂದೋ ಅವನು ತನ್ನನ್ನು ನಿರಂಕುಶನೆಂದೂ ಹೊಣೆರಹಿತನೆಂದೂ ಬಗೆದು ಮನಬಂದಂತೆ

ವರ್ತಿಸತೊಡಗುತ್ತಾನೆ. ಇದು ಅವನನ್ನು ಅಕ್ರಮಿಯಾಗಿ ಮಾಡುತ್ತದೆ ಅಥವಾ ಅವನು ದೇವನ ಹೊರತು ಇತರರ ಆಜ್ಞೆಗಳಿಗೆ ಶಿರಬಾಗತೊಡಗುತ್ತಾನೆ. ಇದರಿಂದಾಗಿ ಭೂಮಿಯ ಮೇಲೆ ಕ್ಷೋಭೆಯು ವಿವಿಧ ರೀತಿಯಲ್ಲಿ ಉಂಟಾಗುತ್ತದೆ.

ಈಗ ಯೋಚಿಸಬೇಕಾದ ಅಂಶವೇನೆಂದರೆ ಮಾನವನು ದೇವನ ವಿರುದ್ಧ ಬಂಡಾಯ ಮಾಡಿದರೆ ಈ ಕೆಡುಕು ಹೇಗೆ ಹುಟ್ಟಿಕೊಳ್ಳುತ್ತವೆ ಎಂಬುದು. ಹಾಗೆ ಬಂಡಾಯ ಹೂಡುವುದು ವಾಸ್ತವಿಕತೆಗೆ ವಿರುದ್ಧವಾಗಿರುವುದರಿಂದ ಅದರ ಪರಿಣಾಮವೂ ಕೆಟ್ಟದಾಗಿರುವುದು ಎಂಬುದೇ ಅದರ ಸ್ಪಷ್ಟ ಹಾಗೂ ನೇರ ಉತ್ತರ. ಈ ಸಂಪೂರ್ಣ ವಿಶ್ವವು ದೇವನ ಸಾಮ್ರಾಜ್ಯವಾಗಿದೆ. ಭೂಮಿ, ಸೂರ್ಯ, ಚಂದ್ರ, ಗಾಳಿ, ನೀರು, ಬೆಳಕು ಎಲ್ಲವೂ ದೇವನ ಸೊತ್ತಾಗಿವೆ. ಮಾನವನ ನೆಲೆಯು ಈ ಸಾಮ್ರಾಜ್ಯದಲ್ಲಿ ಓರ್ವ ಹುಟ್ಟು ದಾಸನದ್ದಾಗಿದೆ. ಈ ಸಂಪೂರ್ಣ ವಿಶ್ವ ಸಾಮ್ರಾಜ್ಯವು ಯಾವ ವ್ಯವಸ್ಥೆಯಲ್ಲಿ ನೆಲೆ ನಿಂತು, ಚಲಿಸುತ್ತಿದೆಯೋ ವಿಶ್ವ ವ್ಯವಸ್ಥೆಯ ಒಂದಂಗವಾಗಿರುವ ಮಾನವನು ಅದಕ್ಕೆ ವಿರುದ್ಧವಾಗಿ ನಡೆದರೆ ಅವನ ಈ ವರ್ತನೆಯಿಂದ ವಿನಾಶಕಾರಿ ಪರಿಣಾಮವನ್ನೇ ಉಂಟು ಮಾಡಬಲ್ಲುದು. ತನ್ನ ಮೇಲೆ ಯಾರೂ ಪರಮಾಧಿಕಾರಿಯಿಲ್ಲ, ತಾನು ಯಾರ ಮುಂದೆಯೂ ಜವಾಬ್ದಾರನಲ್ಲ ಎಂದು ಅವನು ಭಾವಿಸಿದರೆ ಅದು ವಸ್ತುಸ್ಥಿತಿಗೆ ವಿರುದ್ಧವಾಗಿರುವುದು. ಆದುದರಿಂದ ಅವನು ತನ್ನನ್ನು ನಿರಂಕುಶ ನೆಂದು ಭಾವಿಸಿ ಜವಾಬ್ದಾರಿ ರಹಿತವಾದ ವಿಧಾನಗಳಿಂದ ಕೆಲಸ ಮಾಡಿದರೆ ಮತ್ತು ತನ್ನ ಜೀವನಕ್ಕೆ ಬೇಕಾದ ನೀತಿ-ನಿಯಮಗಳನ್ನು ಸ್ವಯಂ ರಚಿಸಿಕೊಂಡರೆ ಅದರ ಪರಿಣಾಮ ಕೆಟ್ಟದಾಗುವುದು. ಅದೇ ರೀತಿಯಲ್ಲಿ ಅವನು ದೇವನ ಹೊರತು ಇನ್ನಾರನ್ನಾದರೂ ಪರಮಾಧಿಕಾರಿಯೆಂದು ಬಗೆದು ಅವರ ಭಯ ಅಥವಾ ನಿರೀಕ್ಷೆಯನ್ನು ಹೃದಯದಲ್ಲಿರಿಸಿಕೊಂಡರೆ ಹಾಗೂ ಅವರ ಒಡೆತನದ ಮುಂದೆ ತಲೆ ಬಾಗಿದರೆ ಅದೂ ವಾಸ್ತವಿಕತೆಯ ವಿರುದ್ಧವಾಗಿರುವುದು. ಏಕೆಂದರೆ ಯಥಾರ್ಥದಲ್ಲಿ ಈ ಸಂಪೂರ್ಣ ವಿಶ್ವದಲ್ಲಿ ದೇವನ ಹೊರತು ಇನ್ನಾರಿಗೂ ಈ ಸ್ಥಾನ ಪ್ರಾಪ್ತವಿಲ್ಲ. ಆದುದರಿಂದ ಅದರ ಪರಿಣಾಮವೂ ಕೆಟ್ಟದಾಗಿಯೇ ಗೋಚರಿಸುವುದು. ಸರಿಯಾದ ಪರಿಣಾಮ ಗೋಚರವಾಗಬೇಕಾದರೆ ಅದಕ್ಕೆ ಒಂದೇ

ಮಾರ್ಗವಿರುವುದು. ಅದೇನೆಂದರೆ ಭೂಮಿ-ಆಕಾಶಗಳಲ್ಲಿ ಯಾರ ನೈಜ ಆಡಳಿತ ವಿರುವುದೋ ಮಾನವನು ಅವನ ಮುಂದೆ ತಲೆಬಾಗುವುದು, ತನ್ನ ಅಹಂಭಾವ ಮತ್ತು ಮೊಂಡುತನವನ್ನು ಅವನ ಮುಂದೆ ಅರ್ಪಿಸಿ ಬಿಡುವುದು, ತನ್ನ ದಾಸ್ಯ-ಅನುಸರಣೆಯನ್ನು ಅವನಿಗಾಗಿ ಮೀಸಲಿಡುವುದು ಮತ್ತು ತನ್ನ ಜೀವನಕ್ಕೆ ಬೇಕಾದ ನಿಯಮ-ನಿಬಂಧನೆಗಳನ್ನು ತಾನೇ ರಚಿಸುವ ಅಥವಾ ಇತರರಿಂದ ಮಾಡಿಸುವ ಬದಲು ಅವನಿಂದಲೇ ಪಡೆಯುವುದು.

ಇದುವೇ ಮುಹಮ್ಮದ್(ಸ) ಅವರು ಮಾನವ ಜೀವನದ ಮೂಲಭೂತ ಸುಧಾರಣೆಗಾಗಿ ಸಮರ್ಪಿಸಿದ ಯೋಜನೆ. ಇದು ಪೂರ್ವ- ಪಶ್ಚಿಮಗಳ ಗಡಿಗಳನ್ನು ಮೀರಿದೆ. ಭೂಮುಖದ ಮೇಲೆ ಎಲ್ಲೆಲ್ಲಾ ಜನರು ವಾಸಿಸುತ್ತಿರುವರೋ ಅವರ ಜೀವನದ ಕೆಟ್ಟು ಹೋದ ನಿನ್ನೆಯನ್ನು ಈ ಒಂದು ಸುಧಾರಣಾ ಯೋಜನೆ ಮಾತ್ರ ಸರಿಪಡಿಸಬಲ್ಲುದು. ಇದು ಭೂತ-ಭವಿಷ್ಯ ಕಾಲಗಳ ಬಂಧನದಿಂದಲೂ ಮುಕ್ತವಾಗಿದೆ. ಒಂದೂವರೆ ಸಾವಿರ ವರ್ಷಗಳ ಹಿಂದೆ ಇದು ಎಷ್ಟು ಸರಿಯೂ ಸೂಕ್ತವೂ ಆಗಿತ್ತೋ ಇಂದಿಗೂ ಹಾಗೆಯೇ ಇದೆ. ಇನ್ನೊಂದು ಹತ್ತು ಸಾವಿರ ವರ್ಷಗಳ ಬಳಿಕವೂ ಹಾಗೆಯೇ ಇರುವುದು.

ಇನ್ನು ಕೊನೆಯ ಶರತ್ತನ್ನು ನೋಡೋಣ. ಮುಹಮ್ಮದ್(ಸ) ಅವರು ಲೋಕಕ್ಕೆ ಕೇವಲ ಕಾಲ್ಪನಿಕ ನಕಾಶೆ ನೀಡಿದ್ದಲ್ಲ, ಬದಲಾಗಿ ಆ ನಕಾಶೆಗೆ ಅನುಗುಣ ವಾದಂತಹ ಒಂದು ಜೀವಂತ ಸಮಾಜವನ್ನು ನಿರ್ಮಿಸಿ ತೋರಿಸಿದರು ಎಂಬುದು ಒಂದು ಐತಿಹಾಸಿಕ ಸತ್ಯವಾಗಿದೆ. ಅವರು ಇಪ್ಪತ್ತಮೂರು ವರ್ಷಗಳ ಅಲ್ಪಾವಧಿಯಲ್ಲಿ ಲಕ್ಷೋಪಲಕ್ಷ ಮಾನವರನ್ನು ದೇವನ ಆಡಳಿತದ ಮುಂದೆ ವಿಧೇಯರಾಗಿ ತಲೆಬಾಗುವಂತೆ ಮಾಡಿದರು. ಅವರಿಂದ ಅವರ ಅಹಂಭಾವವನ್ನು ತೊಡೆದು ಹಾಕಿದರು. ದೇವನ ಹೊರತು ಇತರರ ದಾಸ್ಯದಿಂದ ಅವರನ್ನು ವಿಮೋಚಿಸಿದರು. ತರುವಾಯ ಅವರನ್ನು ಒಂದುಗೂಡಿಸಿ, ಅಪ್ಪಟ ದೇವನ ದಾಸ್ಯ-ಅನುಸರಣೆಯ ಆಧಾರದಲ್ಲಿ ಒಂದು ಹೊಸ ನೈತಿಕ ವ್ಯವಸ್ಥೆ, ಹೊಸ ನಾಗರಿಕ ವ್ಯವಸ್ಥೆ, ಹೊಸ ಆರ್ಥಿಕ ವ್ಯವಸ್ಥೆ ಮತ್ತು ಹೊಸ ಆಡಳಿತ ವ್ಯವಸ್ಥೆಯನ್ನು ರಚಿಸಿದರು ಮತ್ತು ಸಮಸ್ತ ಲೋಕದ ಮುಂದೆ ಅದನ್ನು ಕಾರ್ಯತಃ ಪ್ರದರ್ಶಿಸಿ, ತಾನು ಪ್ರತಿಪಾದಿಸುವ

ತತ್ವಗಳಿಂದ ಎಂತಹ ಉದಾತ್ತ ಜೀವನ ನಿರ್ಮಾಣವಾಗುತ್ತದೆ ಮತ್ತು ಇತರ ತತ್ವಗಳಲ್ಲಾಧರಿತ ಜೀವನಕ್ಕೆ ವಿರುದ್ಧವಾಗಿ ಇದು ಎಷ್ಟು ಉತ್ತಮ, ಎಷ್ಟು ಪಾವನ ಮತ್ತು ಎಷ್ಟು ಪರಿಶುದ್ಧವಾಗಿದೆಯೆಂಬುದನ್ನು ತೋರಿಸಿಕೊಟ್ಟರು.

ಈ ಎಲ್ಲ ಸಾಧನೆಗಳಿಂದಾಗಿ ನಾವು ಮುಹಮ್ಮದ್(ಸ) ಅವರನ್ನು 'ಲೋಕ ನಾಯಕ'ನೆಂದು ಕರೆಯುತ್ತೇವೆ. ಅವರ ಈ ಕಾರ್ಯವು ಯಾವುದೇ ಒಂದು ಜನಾಂಗಕ್ಕಾಗಿರದೆ ಸಂಪೂರ್ಣ ಮಾನವಕುಲಕ್ಕಾಗಿತ್ತು. ಇದು ಸಕಲ ಮಾನವರ ಒಟ್ಟು ವಾರೀಸು ಹಕ್ಕಾಗಿದ್ದು, ಇದರಲ್ಲಿ ಒಬ್ಬರ ಹಕ್ಕು ಇನ್ನೊಬ್ಬರಿಗಿಂತ ಹೆಚ್ಚೋ ಕಡಿಮೆಯೋ ಇಲ್ಲ. ಯಾರು ಬೇಕಾದರೂ ಈ ವಾರೀಸು ಹಕ್ಕಿನ ಪ್ರಯೋಜನ ಪಡೆಯಬಹುದು. ಈ ವಿಷಯದಲ್ಲಿ ಯಾರಾದರೂ ಪಕ್ಷಪಾತ ತೋರುವುದಾದರೆ ಅದಕ್ಕೇನಾದರೂ ಕಾರಣವಿರ ಬಹುದೆಂದು ನನಗನಿಸುವುದಿಲ್ಲ.

# ಲೋಕನಾಯಕನ ನೈಜ ಕಾರ್ಯಸಾಧನೆ

ಅರೇಬಿಯದ ಪ್ರವಾದಿ ಮುಹಮ್ಮದ್(ಸ), ಅನಾದಿ ಕಾಲದಿಂದಲೂ ಮಾನವ ಕುಲಕ್ಕೆ ದೇವಾರಾಧನೆ ಮತ್ತು ಸಚ್ಚಾರಿತ್ರ್ಯದ ಶಿಕ್ಷಣ ನೀಡಲಿಕ್ಕಾಗಿ ಎದ್ದೇಳಿಸಲ್ಪಡುತ್ತಿದ್ದ ಮಾನವತೆಯ ಆಯ್ದ ವರ್ಗಕ್ಕೆ ಸೇರಿದವರಾಗಿದ್ದಾರೆ. ಏಕದೇವನ ಆರಾಧನೆ ಮತ್ತು ಪರಿಶುದ್ಧ ನೈತಿಕ ಜೀವನದ ಪಾಠವನ್ನು ಸದಾ ಜಗತ್ತಿಗೆ ಸತ್ಯಸಂಧರಾದ ಪ್ರವಾದಿಗಳು, ಋಷಿಮುನಿಗಳು ನೀಡುತ್ತಾ ಬಂದಿದ್ದಾರೆ. ಅದೇ ಪಾಠವನ್ನು ಪ್ರವಾದಿ ಮುಹಮ್ಮದ್(ಸ) ಅವರೂ ನೀಡಿದ್ದಾರೆ. ಅವರು ಹೊಸ ದೇವರ ಕಲ್ಪನೆಯನ್ನೇನೂ ನೀಡಲಿಲ್ಲ. ಅವರಿಗಿಂತ ಮುಂಚಿನ ಜನನಾಯಕರು ನೀಡಿದ್ದಕ್ಕಿಂತ ಭಿನ್ನವಾದ ನೈತಿಕ ಶಿಕ್ಷಣವನ್ನು ನೀಡಲಿಲ್ಲ. ಹಾಗಾದರೆ ಅವರ ನೈಜ ಕಾರ್ಯಸಾಧನೆಯಾದರೂ ಏನು?

ಈ ಪ್ರಶ್ನೆಯ ಸಂಕ್ಷಿಪ್ತ ಉತ್ತರ ಹೀಗಿದೆ. ಪ್ರವಾದಿ ಮುಹಮ್ಮದ್(ಸ)ರಿಗಿಂತ ಮುಂಚೆ ಮಾನವ ಕುಲವು ದೇವನ ಅಸ್ತಿತ್ವ ಮತ್ತು ಅವನ ಏಕತೆಯ ಬಗ್ಗೆ ತಿಳಿದಿತ್ತು. ಆದರೆ ಈ ವಾಸ್ತವಿಕತೆಗೆ ಮಾನವೀಯ ನೈತಿಕತೆಯೊಂದಿಗೆ ಯಾವ ಸಂಬಂಧವಿದೆ? ನಿಸ್ಸಂದೇಹವಾಗಿ ಮಾನವನಿಗೆ ನೈತಿಕತೆಯ ಉನ್ನತ ತತ್ವಗಳ ಬಗ್ಗೆ ತಿಳುವಳಿಕೆ ಇತ್ತು. ಆದರೆ ಜೀವನದ ವಿವಿಧ ರಂಗಗಳಲ್ಲಿ ಅವುಗಳ ಪ್ರಾಯೋಗಿಕ ರೂಪ ಹೇಗಿರಬೇಕೆಂಬುದು ತಿಳಿದಿರಲಿಲ್ಲ. ದೇವನ ಮೇಲೆ ವಿಶ್ವಾಸ, ನೈತಿಕ ತತ್ವಗಳು ಮತ್ತು ಪ್ರಾಯೋಗಿಕ ಜೀವನ, ಈ ಮೂರು ಬೇರೆ ಬೇರೆ ವಿಷಯಗಳಾಗಿದ್ದವು. ಅವುಗಳ ಮಧ್ಯೆ ಯಾವುದೇ ತಾತ್ವಿಕ ಸಂಬಂಧವಿರಲಿಲ್ಲ. ಗಾಢ ಮತ್ತು ಪರಿಣಾಮಕಾರಿ ಸಂಪರ್ಕವೂ ಇರಲಿಲ್ಲ. ಈ ಮೂರನ್ನೂ ಸೇರಿಸಿ ಒಂದು ವ್ಯವಸ್ಥೆಯಲ್ಲಿ ಬಂಧಿಸಿ, ಅವುಗಳ ಸಂಯೋಜನೆಯಿಂದ

ಒಂದು ಸಂಪೂರ್ಣ ಸಂಸ್ಕೃತಿ ಮತ್ತು ನಾಗರಿಕತೆಯ ಚಿತ್ರಣವನ್ನು ಸ್ಥಾಪಿಸಿ ತೋರಿಸಿದ್ದು ಮುಹಮ್ಮದ್(ಸ) ಆಗಿದ್ದಾರೆ. ಅದೂ ಕೇವಲ ಭಾವನಾ ಲೋಕದಲ್ಲಲ್ಲ, ಪ್ರಾಯೋಗಿಕ ಜಗತ್ತಿನಲ್ಲಿ.

ದೇವನ ಮೇಲೆ ವಿಶ್ವಾಸ ಎಂಬುದು ಕೇವಲ ಒಂದು ಸತ್ಯವನ್ನು ಒಪ್ಪಿಕೊಳ್ಳುವುದರ ಹೆಸರಲ್ಲ. ಆ ನಂಬಿಕೆಯು ತನ್ನ ಪ್ರಕೃತಿಗನುಸಾರ ಒಂದು ವಿಶಿಷ್ಟ ನೈತಿಕತೆಯನ್ನು ಅಪೇಕ್ಷಿಸುತ್ತದೆ. ನೈತಿಕತೆಯು ಮಾನವ ಜೀವನದ ಸಂಪೂರ್ಣ ವರ್ತನೆಯಲ್ಲಿ ಪ್ರಕಟವಾಗಬೇಕು ಎಂದವರು ತಿಳಿಸಿದರು. ವಿಶ್ವಾಸವು ಒಂದು ಬೀಜವಾಗಿದೆ. ಅದು ಮಾನವ ಮನಸ್ಸಿನಲ್ಲಿ ಬೇರೂರಿದ ಕೂಡಲೇ ತನ್ನ ಪ್ರಕೃತಿಗನುಸಾರ ಪ್ರಾಯೋಗಿಕ ಜೀವನ ವ್ಯವಸ್ಥೆಯಲ್ಲಿ ಪೂರ್ಣ ಹೆಮ್ಮರವಾಗಿ ಅದು ಬೆಳೆಯುತ್ತದೆ. ಅದರಿಂದ ಹೊರಡುವಂತಹ ನೈತಿಕತೆಯ ಜೀವನರಸವು ಕಾಂಡದಿಂದ ಹಿಡಿದು ಅದರ ಗೆಲ್ಲುಗಳು, ಎಲೆಗಳ ವರೆಗೆ ಹರಿಯುತ್ತದೆ. ಮಾವಿನ ಬೀಜ ನೆಟ್ಟರೆ ಹೇಗೆ ನಿಂಬೆ ಬೆಳೆಯುವುದು ಸಾಧ್ಯವಿಲ್ಲೋ ಹಾಗೆಯೇ ದೇವೋಪಾಸನೆಯಿಂದ ಹುಟ್ಟುವ ನೈತಿಕತೆಯು ನಾಸ್ತಿಕತೆ ಅಥವಾ ಭೌತಿಕವಾದದಿಂದ ಹುಟ್ಟುವ ನೈತಿಕತೆಗೆ ಸಮಾನವಾಗಿರುವುದಿಲ್ಲ.

ಜೀವನದ ಈ ಎಲ್ಲ ತತ್ವಶಾಸ್ತ್ರಗಳು ಬೇರೆ ಬೇರೆ ಸ್ವಭಾವವನ್ನು ಹೊಂದಿರುತ್ತವೆ. ಒಂದು ಸ್ವಭಾವವು ಇನ್ನೊಂದಕ್ಕಿಂತ ಬೇರೆಯೇ ನೈತಿಕತೆಯನ್ನು ಅಪೇಕ್ಷಿಸುತ್ತದೆ. ಇನ್ನು ದೇವೋಪಾಸನೆಯಿಂದ ಹುಟ್ಟುವ ನೈತಿಕತೆಯು ಕೇವಲ ಕತ್ತಲ ಕೋಣೆಯಲ್ಲಿ ಪ್ರಕಟವಾಗಬಲ್ಲಂತಹ ಒಂದು ವಿಶಿಷ್ಟ ಸನ್ಯಾಸಿಗಳ ಮತ್ತು ವೈರಾಗಿಗಳ ವರ್ಗಕ್ಕೆ ಸೀಮಿತವಲ್ಲ; ಬದಲಾಗಿ ಅವರ ನೈತಿಕತೆಯು ವ್ಯಾಪಕವಾಗಿ ಇಡೀ ಮಾನವ ಜೀವನದಲ್ಲಿ ಮತ್ತು ಅದರ ಪ್ರತಿಯೊಂದು ರಂಗದಲ್ಲಿ ಇರಬೇಕಾಗಿದೆ. ಒಬ್ಬ ವ್ಯಾಪಾರಿಯು ದೇವಭಕ್ತನಾಗಿದ್ದರೆ ಅವನ ವ್ಯಾಪಾರದಲ್ಲಿ ನೈತಿಕತೆಯು ಇಲ್ಲದಿರಲು ಸಾಧ್ಯವಿಲ್ಲ. ಒಬ್ಬ ನ್ಯಾಯಾಧೀಶ ದೇವಭಕ್ತನಾಗಿದ್ದರೆ ಅದು ನ್ಯಾಯ ಪೀಠದಲ್ಲಿ, ಒಬ್ಬ ಪೊಲೀಸನು ದೇವಭಕ್ತನಾಗಿದ್ದರೆ ಅವನ ಹುದ್ದೆಯಲ್ಲಿ ದೇವಭಕ್ತಿ ಪ್ರಕಟವಾಗದಿರುವುದಕ್ಕೆ ಅರ್ಥವಿಲ್ಲ. ಅದೇ ರೀತಿ ಒಂದು ರಾಷ್ಟ್ರವು ದೇವಭಕ್ತಿಯದಾಗಿದ್ದರೆ, ಅದರ ನಾಗರಿಕ ಜೀವನದಲ್ಲಿ, ಅದರ ಆಡಳಿತ ವ್ಯವಸ್ಥೆಯಲ್ಲಿ ಮತ್ತು ವಿದೇಶ ನೀತಿಯಲ್ಲಿ ಮತ್ತದರ ಯುದ್ಧ ಹಾಗೂ

ಸಂಧಾನಗಳಲ್ಲಿ ದೇವಭಕ್ತಿಯ ನೈತಿಕತೆ ಪ್ರಕಟವಾಗಬೇಕು. ಅನ್ಯಥಾ ಅದರ ದೇವವಿಶ್ವಾಸವು ಕೇವಲ ಅರ್ಥಹೀನ ಪದವಾಗಿ ಬಿಡುವುದು.

ಇನ್ನು ದೇವೋಪಾಸನೆಯು ಎಂಥ ನೈತಿಕತೆಯನ್ನು ಅಪೇಕ್ಷಿಸುತ್ತದೆ ಮತ್ತದು ಮಾನವನ ಪ್ರಾಯೋಗಿಕ ಜೀವನದಲ್ಲಿ ಹಾಗೂ ವೈಯಕ್ತಿಕ ವರ್ತನೆಯಲ್ಲಿ ಹೇಗೆ ಪ್ರಕಟವಾಗಬೇಕು ಎಂಬುದನ್ನು ಈ ಸಂಕ್ಷಿಪ್ತ ಚರ್ಚೆಯಲ್ಲಿ ಸೀಮಿತಗೊಳಿಸುವುದು ಕಷ್ಟ. ಅದೊಂದು ವಿಸ್ತೃತ ಚರ್ಚಾ ವಿಷಯವಾಗಿದೆ. ಆದರೆ ಉದಾಹರಣೆಗಾಗಿ ಕೆಲವು ಪ್ರವಾದಿವಚನಗಳನ್ನು ಇಲ್ಲಿ ಕೊಡಲಾಗಿದೆ. ಅದರಿಂದ ಪ್ರವಾದಿಯವರು(ಸ) ವ್ಯವಸ್ಥೆಗೊಳಿಸಿರುವ ಜೀವನ ಪದ್ಧತಿಯಲ್ಲಿ ವಿಶ್ವಾಸ, ನೈತಿಕತೆ ಮತ್ತು ಕರ್ಮಗಳ ಸಂಯೋಜನೆ ಯಾವ ಸ್ವರೂಪದ್ದೆಂದು ನೀವು ಗ್ರಹಿಸಬಹುದು.

1. ಸತ್ಯವಿಶ್ವಾಸಕ್ಕೆ ಅನೇಕ ಶಾಖೆಗಳಿವೆ. ನೀವು ದೇವನ ಹೊರತು ಇತರ ಯಾರನ್ನೂ ಆರಾಧಿಸಬಾರದು ಎಂಬುದು ಅದರ ಮೂಲ ಬೇರಾಗಿದೆ. ಜನರಿಗೆ ತೊಂದರೆ ಕೊಡಬಲ್ಲಂತಹ ವಸ್ತುವನ್ನು ದಾರಿಯಿಂದ ನಿವಾರಿಸುವುದು, ಲಜ್ಜೆ, ಸಹನೆ, ವಿಶಾಲ ಮನಸ್ಥಿತಿ ಇವೆಲ್ಲವೂ ಸತ್ಯವಿಶ್ವಾಸದ ಶಾಖೆಗಳಾಗಿವೆ.

2. ದೇಹ ಮತ್ತು ಉಡುಪಿನ ಶುದ್ಧಿಯು ವಿಶ್ವಾಸದ ಅರ್ಧಾಂಶವಾಗಿದೆ.

3. ಯಾರ ಜೀವ ಮತ್ತು ಸೊತ್ತಿನಿಂದ ಜನರಿಗೆ ಅಪಾಯವಿಲ್ಲವೋ ಅವನೇ ನೈಜ ವಿಶ್ವಾಸಿ.

4. ಪ್ರಾಮಾಣಿಕತೆ ಇಲ್ಲದವನಲ್ಲಿ ಈಮಾನ್ ಇಲ್ಲ, ವಚನ ಪಾಲಿಸದವನಲ್ಲಿ ಧರ್ಮವಿಲ್ಲ.

5. ಒಳಿತು ಮಾಡಿ ನಿನಗೆ ಸಂತೋಷವಾಗುವುದಾದರೆ ಮತ್ತು ಕೆಡುಕು ಮಾಡಿ ನಿನಗೆ ಬೇಸರವಾಗುವುದಾದರೆ ನೀನು ಸತ್ಯವಿಶ್ವಾಸಿ ಆಗಿರುವೆ.

6. ನಿನ್ನ ಸ್ನೇಹ ಮತ್ತು ವೈರ ಅಲ್ಲಾಹನಿಗಾಗಿರುವುದು, ನಿನ್ನ ನಾಲಗೆ ದೇವನಾಮವನ್ನು ಉಚ್ಚರಿಸುತ್ತಿರುವುದು, ನೀನು ಇಷ್ಟಪಡುವುದನ್ನು ಇತರರಿಗೆ ಬಯಸುವುದು, ನೀನು ಇಷ್ಟಪಡದಿರುವುದನ್ನು ಇತರರಿಗೆ ಇಷ್ಟಪಡದಿರುವುದೇ ಅತ್ಯುತ್ತಮ ಸತ್ಯವಿಶ್ವಾಸಿಯ ಲಕ್ಷಣವಾಗಿದೆ.

7. ಚಾರಿತ್ರ್ಯದಲ್ಲಿ ಅತ್ಯುತ್ತಮನಾಗಿರುವವನು ಮತ್ತು ತನ್ನ ಮನೆಮಂದಿಯ ಪಾಲಿಗೆ ಕರುಣಾಳುವಾಗಿರುವವನ ವಿಶ್ವಾಸವು ಪರಿಪೂರ್ಣವಾಗಿರುವುದು.

8. ಅಲ್ಲಾಹ್ ಮತ್ತು ಪರಲೋಕದ ಮೇಲೆ ವಿಶ್ವಾಸವಿರುವವನು ಅತಿಥಿಗಳನ್ನು ಗೌರವಿಸಬೇಕು, ನೆರೆಹೊರೆಯವರಿಗೆ ಕಿರುಕುಳ ನೀಡಬಾರದು, ಮಾತನಾಡಿದರೆ ಉತ್ತಮ ಮಾತುಗಳನ್ನಾಡಬೇಕು. ಅನ್ಯಥಾ ಮೌನವಾಗಿರಬೇಕು.

9. ಸತ್ಯವಿಶ್ವಾಸಿಯು ಮೂದಲಿಸುವವನು, ಶಪಿಸುವವನು, ಬೈಯುವವನು ಮತ್ತು ಜಗಳಗಂಟಿಯಾಗಿರಲಾರನು.

10. ಸತ್ಯವಿಶ್ವಾಸಿಯು ಎಲ್ಲವೂ ಆಗಿರಬಹುದು. ಆದರೆ ಸುಳ್ಳುಗಾರ ಮತ್ತು ವಂಚಕನಾಗಲಾರ.

11. ಯಾರ ಕಿರುಕುಳದಿಂದ ನೆರೆಯವನು ಸುರಕ್ಷಿತನಲ್ಲವೋ ಅವನು ದೇವನಾಣೆಗೂ ಸತ್ಯವಿಶ್ವಾಸಿಯಲ್ಲ.

12. ನೆರೆಯವನು ಹಸಿದಿರುವಾಗ, ಹೊಟ್ಟೆ ತುಂಬಾ ಉಣ್ಣುವವನು ಸತ್ಯವಿಶ್ವಾಸಿಯಲ್ಲ.

13. ಪ್ರತೀಕಾರವೆಸಗುವ ಸಾಮರ್ಥ್ಯವಿದ್ದೂ ಒಬ್ಬನು ಸಹನೆ ವಹಿಸಿದರೆ ಅವನ ಮನಸ್ಸನ್ನು ಅಲ್ಲಾಹನು ಶಾಂತಗೊಳಿಸುವನು.

14. ಒಬ್ಬನು ಅಕ್ರಮಿಯನ್ನು ಅಕ್ರಮಿಯೆಂದು ತಿಳಿದಿದ್ದೂ ಅವನನ್ನು ಬೆಂಬಲಿಸಿದರೆ ಅವನು ಇಸ್ಲಾಮಿನಿಂದಲೇ ಹೊರ ನಡೆದನು.

15. ಜನರಿಗೆ ತೋರಿಸಲಿಲಕ್ಕಾಗಿ ಒಬ್ಬನು ನಮಾಝ್ ಮಾಡಿದರೆ, ಉಪವಾಸ ಅಚರಿಸಿದರೆ ಅಥವಾ ದಾನಧರ್ಮ ಮಾಡಿದರೆ ಅವನು ದೇವತ್ವ ದಲ್ಲಿ ಜನರನ್ನು ಭಾಗಿಗೊಳಿಸಿದನು.

16. ನಾಲ್ಕು ವಿಷಯಗಳು ಒಬ್ಬನಲ್ಲಿದ್ದರೆ ಅವವನು ಅಪ್ಪಟ ಕಪಟವಿಶ್ವಾಸಿ (ಮುನಾಫಿಕ್) ಆಗಿದ್ದಾನೆ. ಅಮಾನತ್‌ನಲ್ಲಿ (ವಿಶ್ವಸ್ಥತೆಯಲ್ಲಿ) ವಂಚನೆ ಮಾಡುವುದು, ಮಾತನಾಡಿದರೆ ಸುಳ್ಳು ಹೇಳುವುದು, ವಾಗ್ದಾನ ಮಾಡಿದರೆ ಉಲ್ಲಂಘಿಸುವುದು, ಜಗಳಕ್ಕಿಳಿದರೆ ಬೈಯುವುದು.

17. ಸುಳ್ಳು ಸಾಕ್ಷ್ಯವು ಬಹುದೇವಾರಾಧನೆಯ (ಶಿರ್ಕ್‌ನ) ಹತ್ತಿರ ಕೊಂಡೊಯ್ಯಬಲ್ಲಷ್ಟು ಮಹಾ ಪಾಪವಾಗಿದೆ.

18. ಅಲ್ಲಾಹನ ಅನುಸರಣೆಯಲ್ಲಿ ತನ್ನ ಚಿತ್ತದೊಂದಿಗೆ ಹೋರಾಡುವವನೇ ನೈಜ ಯೋಧ (ಮುಜಾಹಿದ್). ಅಲ್ಲಾಹನಿಗೆ ಇಷ್ಟವಿಲ್ಲದ ಕಾರ್ಯಗಳನ್ನು

ತೊರೆಯುವವನೇ ನೈಜ ವಲಸಿಗ (ಮುಹಾಜಿರ್).

19. ತಮ್ಮ ಮುಂದೆ ಸತ್ಯ ಬಂದಾಗ ಅದನ್ನು ಸ್ವೀಕರಿಸುವವರು, ತಮ್ಮಿಂದೇನಾದರೂ ಅಪೇಕ್ಷಿಸಿದಾಗ ಮನಬಿಚ್ಚಿ ಸಹಾಯ ನೀಡುವವರು, ಇತರರ ವಿಷಯದಲ್ಲಿ ತೀರ್ಮಾನಿಸುವಾಗ ಸ್ವಯಂ ತಮ್ಮ ವಿಷಯದಲ್ಲಿ ತಿಳಿದಿರುವಂತೆ ತೀರ್ಮಾನಿಸುವವರು ಅಂತ್ಯ ದಿನದಂದು (ಕಿಯಾಮತ್‌ನಂದು) ಅಲ್ಲಾಹನ ನೆರಳಿನಲ್ಲಿ ಸ್ಥಾನ ಪಡೆಯುವವರಾಗಿದ್ದಾರೆ.

20. ನೀವು ಆರು ವಿಷಯಗಳ ಭರವಸೆ ನೀಡಿರಿ. ನಾನು ನಿಮಗೆ ಸ್ವರ್ಗದ ಭರವಸೆ ನೀಡುತ್ತೇನೆ. ಮಾತನಾಡುವಾಗ ಸತ್ಯ ಹೇಳಿರಿ, ವಾಗ್ದಾನ ಮಾಡಿದರೆ ಪಾಲಿಸಿರಿ, ಅಮಾನತನ್ನು (ವಿಶ್ವಸ್ಥತೆಯನ್ನು) ಸಂರಕ್ಷಿಸಿರಿ, ದುರಾಚಾರ ದಿಂದ ದೂರವಿರಿ, ಕೆಟ್ಟ ದೃಷ್ಟಿಯಿಂದ ಸುರಕ್ಷಿತರಾಗಿರಿ, ಅಕ್ರಮದಿಂದ ತಡೆಯಿರಿ.

21. ಮೋಸಗಾರ, ಜಿಪುಣ, ಉಪಕಾರ ಭಾರವಿರಿಸುವವನು ಸ್ವರ್ಗ ಪ್ರವೇಶಿಸಲಾರನು.

22. ನಿಷಿದ್ಧ (ಹರಾಮ್) ಸಂಪಾದನೆಯಿಂದ ಬೆಳೆದ ಶರೀರಕ್ಕೆ ನರಕಾಗ್ನಿಯೇ ತಕ್ಕ ಸ್ಥಾನ. ಅವನು ಸ್ವರ್ಗಕ್ಕೆ ಹೋಗಲಾರ.

23. ನ್ಯೂನತೆಯಿರುವ ವಸ್ತುವನ್ನು ಮಾರಾಟ ಮಾಡುವಾಗ ಗ್ರಾಹಕನಿಗೆ ಅದರ ನ್ಯೂನತೆಯನ್ನು ತಿಳಿಸದಿದ್ದರೆ, ಅವನ ಮೇಲೆ ಅಲ್ಲಾಹನ ಕ್ರೋಧವಿರು ವುದು. ದೇವಚರರು ಅವನನ್ನು ಶಪಿಸುವರು.

24. ಪದೇ ಪದೇ ಜೀವನ ಸಿಕ್ಕಿಯೂ ಅಲ್ಲಾಹನ ಮಾರ್ಗದಲ್ಲಿ ಜಿಹಾದ್ ಮಾಡುತ್ತಾ ಹುತಾತ್ಮನಾದರೂ ಅವನು ಯಾರಿಂದಾದರೂ ಪಡೆದ ಸಾಲವನ್ನು ಮರು ಪಾವತಿಸದಿದ್ದರೆ ಅವನು ಸ್ವರ್ಗಕ್ಕೆ ಹೋಗಲಾರ.

25. ಒಬ್ಬನು 60 ವರ್ಷಗಳ ಕಾಲ ಆರಾಧನೆ ಮಾಡಿ, ಮರಣದ ವೇಳೆ ಮಾಡಿದ ಒಂದು ವಸಿಯ್ಯತ್(ಉಯಿಲಿ)ನಲ್ಲಿ ಅರ್ಹ ಹಕ್ಕುದಾರರನ್ನು ವಂಚಿಸಿದರೆ ಅವನು ನರಕಕ್ಕೆ ಅರ್ಹನಾಗುತ್ತಾನೆ.

26. ಉಪವಾಸ, ದಾನಧರ್ಮ ಮತ್ತು ನಮಾಝ್ ಇವುಗಳಿಗಿಂತ ಶ್ರೇಷ್ಠ ವಾದ ಕರ್ಮ ಯಾವುದೆಂದು ನಾನು ಹೇಳಿ ಕೊಡಲೇ? ವಿರಸದಲ್ಲಿ ಸಂಧಾನ ನಡೆಸುವುದು ಮತ್ತು ಜನರ ಮಧ್ಯೆ ಪರಸ್ಪರ ಸಂಬಂಧವನ್ನು ಬಲಪಡಿಸುವುದಾ

ಗಿದೆ. ಯಾರು ಸಂಬಂಧವನ್ನು ಕೆಡಿಸುತ್ತಾರೋ ಅವರ ಸಕಲ ಒಳಿತುಗಳು ಅಳಿಸಿ ಹಾಕಲ್ಪಡುತ್ತದೆ.

27. ನಮಾಝ್, ಉಪವಾಸ, ಝಕಾತ್ ಎಲ್ಲವನ್ನು ಹೊಂದಿರುವ ವ್ಯಕ್ತಿ ಅಂತ್ಯದಿನದಂದು ಅಲ್ಲಾಹನ ಮುಂದೆ ನೈಜ ದರಿದ್ರ ವ್ಯಕ್ತಿಯಾಗಿ ಹಾಜರಾಗುವನು. ಆತ ಯಾರನ್ನಾದರೂ ಬೈದಿರುವ, ಯಾರ ಮೇಲಾದರೂ ಅಪವಾದ ಹೊರಿಸಿರುವ, ಯಾರದಾದರೂ ಸೊತ್ತು ಕಬಳಿಸಿರುವ ಮತ್ತು ಯಾರದಾದರೂ ರಕ್ತಿ ಹರಿಸಿರುವ ಕಾರಣಕ್ಕಾಗಿ ಅಲ್ಲಾಹನು ಅವನ ಒಂದೊಂದು ಸತ್ಕರ್ಮವನ್ನು ಆ ಮರ್ದಿತರಲ್ಲಿ ಹಂಚಿ ಬಿಡುವನು ಹಾಗೂ ಅವರ ಒಂದೊಂದು ಪಾಪವನ್ನು ಇವನ ಲೆಕ್ಕದಲ್ಲಿ ಹಾಕಿ ಬಿಡುವನು. ಆಗ ಇವನ ಬಳಿ ನರಕದಿಂದ ಪಾರುಗೊಳಿಸಲು ಏನೂ ಉಳಿಯಲಾರದು.

28. ಜನರು ತಮ್ಮ ಕೆಡುಕುಗಳನ್ನು ಸಮರ್ಥಿಸುತ್ತಾ ತಮ್ಮನ್ನು ತಾವೇ ಸಾಂತ್ವನ ಪಡಿಸದಿದ್ದರೆ, ಅವರು ಮೋಕ್ಷದಿಂದ ವಂಚಿತರಾಗಲಾರರು.

29. ಬೆಲೆಯೇರಿಸಲಿಕ್ಕಾಗಿ ಸರಕನ್ನು ದಾಸ್ತಾನು ಮಾಡುವವನು ಶಪಿಸಲ್ಪಟ್ಟವನಾಗಿದ್ದಾನೆ.

30. ಬೆಲೆಯೇರಲೆಂದು ದವಸ-ಧಾನ್ಯಗಳನ್ನು ತಡೆದಿರಿಸಿದವನಿಗೆ ಅಲ್ಲಾಹನೊಂದಿಗೆ ಯಾವ ಸಂಬಂಧವೂ ಇಲ್ಲ. ಅನಂತರ ಅವನು ಅದನ್ನು ದಾನ ಮಾಡಿದರೂ ಕ್ಷಮಿಸಲ್ಪಡಲಾರನು.

31. ಪ್ರವಾದಿವರ್ಯರ(ಸ) ಈ ವಚನಗಳು ವಿಶ್ವಾಸದೊಂದಿಗೆ ಚಾರಿತ್ರ್ಯದ ಮತ್ತು ಚಾರಿತ್ರ್ಯದೊಂದಿಗೆ ಜೀವನದ ಸಕಲ ರಂಗಗಳ ಸಂಬಂಧ ಹೇಗೆ ಸ್ಥಾಪಿಸಲ್ಪಡುತ್ತದೆ ಎಂದು ಅಂದಾಜಿಸಬಹುದು. ಪ್ರವಾದಿ(ಸ) ಈ ವಿಷಯಗಳನ್ನು ಕೇವಲ ಮಾತಿಗಷ್ಟೇ ಸೀಮಿತಗೊಳಿಸಲಿಲ್ಲ, ಪ್ರಾಯೋಗಿಕವಾಗಿ ಒಂದು ರಾಷ್ಟ್ರದ ಸಂಪೂರ್ಣ ನಾಗರಿಕ ವ್ಯವಸ್ಥೆಯನ್ನು ಇದೇ ಆಧಾರದಲ್ಲಿ ಸ್ಥಾಪಿಸಿ ತೋರಿಸಿದರು ಎಂದು ಇತಿಹಾಸದ ಅಧ್ಯಯನ ನಡೆಸುವವರಿಗೆ ಮನವರಿಕೆಯಾಗಬಹುದು. ಇಂತಹ ಸಾಧನೆಯಿಂದಾಗಿ ಪ್ರವಾದಿ ಮುಹಮ್ಮದ್(ಸ) ಅವರು ಮಾನವಕುಲದ ಮಹಾನಾಯಕನಾಗಿ ಮೆರೆದರು.

❖ ❖ ❖ ❖